# ಓದು ಮತ್ತು ಕಲಿಕೆಯಲ್ಲಿ ಆಸಕ್ತಿಯ ಕಿಡಿ ಹೊತ್ತಿಸಿದ ಪತ್ರಿಕೆ - ಚಕ್‌ಮಕ್

**ವಿನತಾ ವಿಶ್ವನಾಥನ್**

ಚಕ್‌ಮಕ್ 10 ರಿಂದ 14 ವರ್ಷ ವಯಸ್ಸಿನ ಮಕ್ಕಳಿಗಾಗಿ ಹಿಂದಿ ಭಾಷೆಯಲ್ಲಿ ಪ್ರಕಟವಾಗುತ್ತಿರುವ ವಿಜ್ಞಾನ ವಿಷಯಕ್ಕೆ ಸಂಬಂಧಿಸಿದ ಮಾಸಿಕ ಪತ್ರಿಕೆಯಾಗಿದೆ. ರೆಕ್ಸ್ ಡಿ'ರೊಜಾರಿಯೊ ಮತ್ತು ವಿನೋದ್ ರೈನಾರ ಕಲ್ಪನೆಯ ಕೂಸಾದ ಇದನ್ನು, 1985 ರಲ್ಲಿ ಪ್ರಾರಂಭಿಸಲಾಯಿತು. ಮಕ್ಕಳನ್ನು ಓದಲು ಪ್ರೋತ್ಸಾಹಿಸುವುದು ಮತ್ತು ಸಾಮಾನ್ಯವಾಗಿ ಆ ವಯಸ್ಸಿನಲ್ಲಿ ಅವರು ಶಾಲೆಗಳಲ್ಲಿ ಕಲಿತದ್ದಕ್ಕೆ ಪೂರಕವಾದುದನ್ನು ನೀಡುತ್ತಾ ಕಲಿಕೆಯನ್ನು ಆನಂದಿಸುವ ಪ್ರಕ್ರಿಯೆಯನ್ನಾಗಿ ಮಾಡುವುದು ಇದರ ಹಿಂದಿನ ಉದ್ದೇಶವಾಗಿತ್ತು. ಆ ಸಮಯದಲ್ಲಿ ಚಕ್‌ಮಕ್ ಕಥೆಗಳು, ಕವನಗಳು ಮತ್ತು ಚಿತ್ರಗಳ ಜೊತೆಗೆ ಸಾಕಷ್ಟು ಪ್ರಮಾಣದಲ್ಲಿ ವಿಜ್ಞಾನದ ವಿಷಯವನ್ನು ಒಳಗೊಂಡಿತ್ತು. ಓದುಗರನ್ನು ಸೆಳೆಯಲು, ಅವರ ಸೃಜನಶೀಲತೆಯನ್ನು ಪ್ರೋತ್ಸಾಹಿಸಲು ಮತ್ತು ಸ್ವತಂತ್ರ ಚಿಂತನೆಯನ್ನು ಉತ್ತೇಜಿಸಲು ವಿಜ್ಞಾನದ ವಿಷಯಗಳನ್ನು ವಿವಿಧ ರೂಪಗಳಲ್ಲಿ ಪ್ರಸ್ತುತಪಡಿಸಲಾಯಿತು. ಪ್ರತಿ ಸಂಚಿಕೆಯಲ್ಲಿ ಮಕ್ಕಳು ಬರೆದ ಕವನಗಳು, ಕಥೆಗಳು ಮತ್ತು ಚಿತ್ರಗಳನ್ನು ಸಹ ಪ್ರಕಟಿಸಲಾಯಿತು, ಇದು ಮಕ್ಕಳು ಪತ್ರಿಕೆಯೊಂದಿಗೆ ತಮ್ಮನ್ನು ಗುರುತಿಸಿಕೊಳ್ಳಲು ಸಹಾಯ ಮಾಡಿತು.

ಕಳೆದ ಮೂರು ದಶಕಗಳಲ್ಲಿ, ಚಕ್‌ಮಕ್ ಅನೇಕ ಬದಲಾವಣೆಗಳನ್ನು ಕಂಡಿದೆ. ಆದರೆ, ಪೂರಕ ವಿಷಯಗಳನ್ನು ಓದುಗರಿಗೆ ನೀಡುವುದು, ಮಕ್ಕಳಿಗೆ ಓದಿನ ಖುಷಿ ನೀಡುವ ವ್ಯಾಪಕ ಶ್ರೇಣಿಯ ವಿಷಯಗಳನ್ನು ಓದಲು ಅನುವು ಮಾಡಿಕೊಡುವುದು ಮುಂತಾದ ಅದರ ಮೂಲಭೂತ ಗುರಿಗಳು ಹಾಗೆಯೇ ಉಳಿದಿವೆ .

ಹೋಶಂಗಾಬಾದ್ ಸೈನ್ಸ್ ಟೀಚಿಂಗ್ ಪ್ರೋಗ್ರಾಂ (ಹೆಚ್‌ಎಸ್‌ಟಿಪಿ -HSTP) ನಲ್ಲಿ ತೊಡಗಿಕೊಂಡಿದ್ದವರಿಗೆ ಮಕ್ಕಳಿಗಾಗಿ ವಿಜ್ಞಾನ ನಿಯತಕಾಲಿಕ ತರುವ ಕಲ್ಪನೆಯು ಹೊಸತೇನಾಗಿರಲಿಲ್ಲ. 70 ರ ದಶಕದಲ್ಲಿ ಪ್ರಾರಂಭವಾಗಿ ಹೊಸದಾರಿ ನಿರ್ಮಾಣಕ್ಕೆ ಕಾರಣವಾದ ಮಾಧ್ಯಮಿಕ ಶಾಲಾ ಮಕ್ಕಳ ವಿಜ್ಞಾನದ ವರ್ಕ್‌ಬುಕ್ *ಬಾಲ ವೈಜ್ಞಾನಿಕ್* ಹಿಂದಿಯಲ್ಲಿ ಪ್ರಕಟಗೊಳ್ಳುತ್ತಿತ್ತು. ಅಲ್ಲದೆ, ಹೆಚ್‌ಎಸ್‌ಟಿಪಿಯ ಭಾಗವಾಗಿದ್ದ ಶಾಲೆಗಳಲ್ಲಿ ವಿಶಿಷ್ಟವಾದ ಮತ್ತು ಆ ಕಾಲಘಟ್ಟಕ್ಕಿಂತ ಸಾಕಷ್ಟು ಮುಂದಿದ್ದ ಬೋಧನಾ ವಿಧಾನವನ್ನು ಪರಿಚಯಿಸಲಾಗಿತ್ತು. ಇಲ್ಲಿ ಪಠ್ಯಕ್ರಮವು ಕೇವಲ ಮಾಹಿತಿಯನ್ನು ನೀಡಲಿಲ್ಲ, ಬದಲಿಗೆ ಮುಖ್ಯವಾಹಿನಿಯ ಪಠ್ಯಪುಸ್ತಕಗಳು ಒಳಗೊಂಡಿರುವ ಅದೇ ವಿಷಯಗಳನ್ನು ಆನಂದಿಸುತ್ತ ಕಲಿಯುವಂತೆ ಮಾಡಲಾಗಿತ್ತು. ಇಲ್ಲಿ ಪ್ರಸ್ತುತ ಪಡಿಸಲಾದ ವಿಷಯಗಳನ್ನು ಚಟುವಟಿಕೆಗಳು ಮತ್ತು ಪ್ರಶ್ನೆಗಳು, ಪ್ರಯೋಗಶೀಲತೆಗೆ ಉತ್ತೇಜನ, ದತ್ತಾಂಶ ಸಂಗ್ರಹಣೆ, ಹೋಲಿಕೆ, ಮತ್ತು ವೈಜ್ಞಾನಿಕ ಚಿಂತನೆಯನ್ನು ಉತ್ತೇಜಿಸುವ ಮಾದರಿಯಲ್ಲಿ ರೂಪಿಸಲಾಗಿತ್ತು ಮತ್ತು ಇದು ವಿಜ್ಞಾನ-ಕಲಿಕೆಯನ್ನು ಪ್ರಸ್ತುತ ಮತ್ತು ವಿನೋದಮಯವಾಗಿಸುವ ಮೂಲಕ ವೈವಿಧ್ಯಮಯ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಸಹಾಯ ಮಾಡಿತು. ಬಾಲ ವೈಜ್ಞಾನಿಕ್ ಮಕ್ಕಳು (ಮತ್ತು

ಶಿಕ್ಷಕರು) ಯೋಚಿಸಲು, ಇನ್ನಷ್ಟು ತಿಳಿದುಕೊಳ್ಳಲು, ಅನ್ವೇಷಣೆಯ ಮೂಲಕ ಕಲಿತುಕೊಳ್ಳುವಿಕೆಯಲ್ಲಿ ಇರುವ ಆನಂದವನ್ನು ಹುಡುಕಲು ಸಹಾಯ ಮಾಡಿತು.

ಈ ಕುತೂಹಲ, ವಿಜ್ಞಾನದ ಬಗ್ಗೆ ಇನ್ನಷ್ಟು ತಿಳಿದುಕೊಳ್ಳುವ ಉತ್ಸುಕತೆಗೆ ಆ ಸಮಯದಲ್ಲಿ ಹೆಚ್ಚಿನ ಆಯ್ಕೆ ಹಾಗೂ ಅವಕಾಶಗಳಿರಲಿಲ್ಲ. ಮಧ್ಯಪ್ರದೇಶದ ಗ್ರಾಮೀಣ ಪ್ರದೇಶದ ಮಗುವೊಂದು ತನಗೆ ಅರ್ಥವಾಗುವ ರೀತಿಯಲ್ಲಿ ಕಲಿಯಲು ಪುಸ್ತಕಗಳು ಲಭ್ಯವಿರುವ ಗ್ರಂಥಾಲಯಕ್ಕೆ ಪ್ರವೇಶವನ್ನು ಪಡೆಯುವುದು ಅಸಂಭವವಾಗಿತ್ತು.

ಈ ಸಮಯದಲ್ಲಿ ಜನ್ಮ ತಾಳಿದ್ದೇ ಚಕ್‌ಮಕ್. ಬಾಲ ವಿಜ್ಞಾನಿಗಳಿಗಾಗಿ ರಚಿಸಲಾದ ಈ ಪತ್ರಿಕೆ, 11-14 ವರ್ಷ ವಯಸ್ಸಿನ ಮಕ್ಕಳನ್ನು ತನ್ನ ಓದುಗರನ್ನಾಗಿಸಿಕೊಳ್ಳುವ ಗುರಿ ಹೊಂದಿತ್ತು. ಇದು ಅವರಿಗೆ ಪೂರಕ ಓದು, ನಿರ್ದಿಷ್ಟವಾಗಿ ವಿಜ್ಞಾನದ ಓದುವಿಕೆಯಾಗಿತ್ತು. ಆ ದಿನಗಳಲ್ಲಿ ಮಾಧ್ಯಮಿಕ ಶಾಲಾ ಮಕ್ಕಳಿಗೆ ಹಿಂದಿ ವಿಜ್ಞಾನ ಪತ್ರಿಕೆಯೊಂದು ಅವನಕಾಶಗಳು ತುಂಬಿದ ಗೂಡಾಗಿತ್ತು. ಈಗಲೂ, ಅದೇ ರೀತಿಯ ಕೆಲವು ನಿಯತಕಾಲಿಕೆಗಳು ಇವೆ.

ಚಕ್‌ಮಕ್‌ನ ಆರಂಭಿಕ ಆವೃತ್ತಿಗಳನ್ನು ನೋಡಿದರೆ, ವಿಜ್ಞಾನವು ಪತ್ರಿಕೆಯ ಕೇಂದ್ರಬಿಂದುವಾಗಿದ್ದರೂ, ವಿಜ್ಞಾನದ ಹೊರತಾಗಿ ಪ್ರಚಲಿತ ವಿದ್ಯಮಾನಗಳು, ಸಾಮಾಜಿಕ ಸಮಸ್ಯೆಗಳು, ವ್ಯಕ್ತಿ-ಚಿತ್ರಣ, ಕಥೆಗಳು ಮತ್ತು ಕವಿತೆಗಳಂತಹ ಲೇಖನಗಳು ಸಹ ಇದ್ದವು. ನಿಯತಕಾಲಿಕದಲ್ಲಿ ಹಲವಾರು ನಿಯಮಿತ ವೈಶಿಷ್ಟ್ಯಗಳು ಅಥವಾ ಅಂಕಣಗಳೂ ಇದ್ದವು. ಆರಂಭದ ದಿನಗಳಿಂದಲೂ ನಿಯತಕಾಲಿಕೆಯಲ್ಲಿ *ಮಠಪಾಚ್ಚಿ* ಎಂಬ ಅಂಕಣದಲ್ಲಿ ಮಕ್ಕಳಿಗೆ ಬಿಡಿಸಲು ಶಬ್ದಗಳ ಮತ್ತು ಚಿತ್ರಗಳ ಒಗಟುಗಳನ್ನು ನೀಡಲಾಗುತ್ತಿತ್ತು. ಓದುಗರಲ್ಲಿ ಸಮಸ್ಯೆ-ಪರಿಹರಿಸುವ ಮನೋಭಾವವನ್ನು ಬೆಳೆಸುವುದು ಇದರ ಉದ್ದೇಶವಾಗಿತ್ತು. ಈ ನಿಯತಕಾಲಿಕೆಯಲ್ಲಿ *ಸಾವಲಿರಾಮ್* ಎಂಬ ಕಾಲ್ಪನಿಕ ಪಾತ್ರವಿತ್ತು, ಈ ಪಾತ್ರಕ್ಕೆ ಮಗುವು ಯಾವುದೇ ಪ್ರಶ್ನೆಯನ್ನು ಕೇಳಬಹುದಿತ್ತು ಮತ್ತು ಖಚಿತವಾಗಿ ಉತ್ತರವನ್ನು ನಿರೀಕ್ಷಿಸಬಹುದಿತ್ತು. ಎಚ್‌ಎಸ್‌ಟಿಪಿ ಅನುಷ್ಠಾನಗೊಳ್ಳುತ್ತಿರುವ ಎಲ್ಲಾ ಶಾಲೆಗಳಲ್ಲಿ ಸಾವಲಿರಾಮ್ ಪರಿಚಿತ ಪಾತ್ರವಾಗಿತ್ತು. ಪ್ರತಿ ವಾರ ಡಜನ್‌ಗಟ್ಟಲೆ ಪೋಸ್ಟ್‌ಕಾರ್ಡ್‌ಗಳು ಮತ್ತು ಪತ್ರಗಳು ಆ ಪಾತ್ರಕ್ಕೆ ಬರುತ್ತಿದ್ದವು. ಏಕಲವ್ಯ ಮತ್ತು ಚಕ್‌ಮಕ್ ತಂಡಗಳು ಸಾಮಾನ್ಯವಾಗಿ ದೇಶದಲ್ಲಿಯೇ ವಿಜ್ಞಾನದಲ್ಲಿ ಅತ್ಯುತ್ತಮ ಪರಿಣತಿಯನ್ನು ಹೊಂದಿದ ವಿಜ್ಞಾನಿಗಳನ್ನು ಅದಕ್ಕೆ ಉತ್ತರಿಸಲು ಅವಲಂಬಿಸಿದ್ದವು. ಕೆಲವು ಪ್ರಶ್ನೆಗಳು ಅತ್ಯಂತ ಸವಾಲಿನವಾಗಿರುತ್ತಿದ್ದವು ಮತ್ತು ಕೆಲವು ಸರಳವಾಗಿರುತ್ತಿದ್ದವು.

ಈ ನಿಯತಕಾಲಿಕೆಯಲ್ಲಿ *ಅಪ್ನಿ ಪ್ರಯೋಗ ಶಾಲಾ* ಎಂಬ ಪ್ರಯೋಗಾತ್ಮಕ ಅಂಕಣ ಇತ್ತು, ಅಲ್ಲಿ ಕೆಲವು ಸರಳವಾದ ಸೂಚನೆಗಳನ್ನು ಅನುಸರಿಸಿ ಮತ್ತು ಯಾವುದೇ ಮಗು ತನ್ನ ಸುತ್ತ ಮುತ್ತಲು ಸಿಗುವ ವಸ್ತುಗಳನ್ನೇ ಬಳಸಿ, ತನ್ನ ಬಿಡುವಿನ ವೇಳೆಯಲ್ಲಿ ಅವುಗಳನ್ನು ಬಳಸಿಕೊಂಡು ಪ್ರಯೋಗಗಳನ್ನು ಮಾಡಿ ಆಶ್ಚರ್ಯಕರ ವಿದ್ಯಮಾನಗಳನ್ನು ಗಮನಿಸಬಹುದಾಗಿತ್ತು. ಅಂತಿಮವಾಗಿ, *ಮೇರಾ ಪನ್ನಾ* ಎನ್ನುವ ಪುಟ ಇತ್ತು - ಮಕ್ಕಳ ಕವಿತೆಗಳು, ಕಥೆಗಳು ಮತ್ತು ಚಿತ್ರಣಗಳಿಗೆ ಅಲ್ಲಿ ಸ್ಥಳ ಮೀಸಲಾಗಿತ್ತು. ಮಕ್ಕಳ ಬರಹ, ಚಿತ್ರಗಳಿಗೆ ಅಲ್ಲಿ ಕೆಲವೊಮ್ಮೆ ಮುಖಪುಟದಲ್ಲಿ, ಕೆಲವೊಮ್ಮೆ ಲೇಖನ ಅಥವಾ ಕಥಾ ವಿಭಾಗದಲ್ಲಿ ಆದ್ಯತೆ ನೀಡಲಾಗುತ್ತಿತ್ತು. ಇದರ ಜೊತೆಗೆ, ಪದಬಂಧಗಳು, ಚಿತ್ರ ಕಥೆಗಳು,

ಖೇಲ್ ಖೇಲ್ ಮೇ, ಜೋಕ್‌ಗಳು - ಮಕ್ಕಳನ್ನು ಹಿಡಿದಿಟ್ಟುಕೊಳ್ಳುವ ಮತ್ತು ಸಂತೋಷಪಡಿಸುವ ಹಲವಾರು ವಿಷಯಗಳು ಅದರಲ್ಲಿದ್ದವು. ಚಕ್‌ಮಕ್ ಮಕ್ಕಳಿಗೆ ಒಂದು *ಪಿಠಾರ (ಪೆಟ್ಟಿಗೆ),* ಒಂದು ಜ್ಞಾನದ ಭಂಡಾರವಾಗಿತ್ತು.

ವಿಷಯ ಪ್ರಸ್ತುತಿ ಮತ್ತು ಶೈಲಿಯಲ್ಲಿ ಮಕ್ಕಳ ತಿಳಿವಳಿಕೆಯ ಮಟ್ಟದಲ್ಲಿಯೇ ಅವರಿಗೆ ಅರ್ಥವಾಗುವ ರೀತಿಯಲ್ಲಿಯೇ ರೂಪಿಸುವ ಸಂಘಟಿತ ಪ್ರಯತ್ನವಿತ್ತು. ಬರವಣಿಗೆಯ ಶೈಲಿಯಲ್ಲಿ ಮಕ್ಕಳನ್ನು ಲಘುವಾಗಿ ಪರಿಗಣಿಸುತ್ತಿರಲಿಲ್ಲ. ಪುಟಗಳ ವಿವರಣೆಗಳು ಮತ್ತು ವಿನ್ಯಾಸವು ಮೊದಲಿನಿಂದಲೂ ವೈವಿಧ್ಯಮಯ ಶೈಲಿಗಳಲ್ಲಿದ್ದು, ಇದರಲ್ಲಿ ಜನಗಢ್/ಜಂಗಧ್ ಸಿಂಗ್ ಶ್ಯಾಮ್ ಅವರಂತಹ ಕಲಾವಿದರ 'ಬುಡಕಟ್ಟು' ಶೈಲಿಗಳು ಸೇರಿದ್ದವು. ಬಾಲಿಶ ವ್ಯಂಗ್ಯಚಿತ್ರಗಳಿಂದ ದೂರ ಸರಿದು ಮಕ್ಕಳಿಗೆ ಉತ್ತಮ ಕಲೆಯನ್ನು ನೀಡಲು ಯತ್ನಿಸಲಾಯಿತು. ಪಠ್ಯ ಅಥವಾ ವಿವರಣೆಗಳು ಮತ್ತು ವಿನ್ಯಾಸಕ್ಕೆ ಸಂಬಂಧಿಸಿದಂತೆ, ಮಕ್ಕಳನ್ನು ಇತರರಿಗೆ ಸಮಾನವಾಗಿ ಪರಿಗಣಿಸಲಾಯಿತು.

ಆ ಕಾಲದಲ್ಲಿ ಎಚ್‌ಎಸ್‌ಟಿಪಿ ಉತ್ತುಂಗದಲ್ಲಿತ್ತು, ಮಕ್ಕಳೊಂದಿಗೆ ನಿರಂತರ ಸಂಪರ್ಕ ಹೊಂದಿತ್ತು, ಚಕ್‌ಮಕ್‌ನ ಸಂಪಾದಕೀಯ ತಂಡವು ವಿಜ್ಞಾನ ಪತ್ರಿಕೆಯಲ್ಲಿ ಮಕ್ಕಳು ಏನನ್ನು ಓದಬೇಕೆಂದು ಬಯಸುತ್ತಾರೆಂದು ತಿಳಿದಿತ್ತು, ಮಕ್ಕಳ ನಾಡಿಮಿಡಿತವನ್ನು ಅರಿತುಕೊಂಡಿತ್ತು. ಎಚ್‌ಎಸ್‌ಟಿಪಿ ಅನುಸರಣೆಯ ಸಭೆಗಳಿಗೆ, ಮಾಸಿಕ ಸಭೆಗಳಿಗೆ, ಶಾಲೆಗಳಿಗೆ ಹೋಗುತ್ತಿದ್ದ *ಏಕಲವ್ಯ* ತಂಡದ ಎಲ್ಲರೂ ಚಕ್‌ಮಕ್‌ನ ಬಂಡಲ್‌ಗಟ್ಟಲೆ ಪ್ರತಿಗಳನ್ನು ಒಯ್ಯುತ್ತಿದ್ದರು. ಮಕ್ಕಳಿಗೆ ರಿಯಾಯತಿ ದರದಲ್ಲಿ ಎಂದರೆ ಒಂದು ಪ್ರತಿಗೆ ಒಂದು ಅಥವಾ ಎರಡು ರೂಪಾಯಿ ಬೆಲೆಯಲ್ಲಿ ಪತ್ರಿಕೆಯನ್ನು ಮಾರಾಟ ಮಾಡುತ್ತಿದ್ದರು. ಈ ಸಭೆಗಳಲ್ಲಿ ಭಾಗವಹಿಸುತ್ತಿದ್ದ ಶಿಕ್ಷಕರು ತಮ್ಮ ಶಾಲೆಯ ವಿದ್ಯಾರ್ಥಿಗಳಿಗೆ ನಿಯತಕಾಲಿಕೆಗಳನ್ನು ತಲುಪಿಸಲು ಸ್ವಯಂಸೇವಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಮಕ್ಕಳು ಚಕ್‌ಮಕ್‌ಗೆ ಆಗಾಗ ಬರೆಯುತ್ತಿದ್ದರು. ಸಾವಲಿರಾಮ್‌ಗೆ ಸಂಬಂಧಿಸಿದ ಪ್ರಶ್ನೆಗಳು, ಮೇರಾ ಪನ್ನಾಗೆ ಅವರು ನೀಡಿದ ಕೊಡುಗೆಗಳು ಚಕ್‌ಮಕ್‌ನ ಸಂಪಾದಕ ಮಂಡಳಿಗೆ ಮಕ್ಕಳು ಪತ್ರಿಕೆಯಲ್ಲಿನ ವಿಷಯಗಳನ್ನು ಹೇಗೆ ಸ್ವೀಕರಿಸುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ಸಹಾಯ ಮಾಡಿತು. ಆ ಸಮಯದಲ್ಲಿ, ಶಿಕ್ಷಕರು ವೈವಿಧ್ಯಮಯ ವಿಷಯಗಳನ್ನು ಚರ್ಚಿಸಲು, ಪತ್ರಿಕೆಯಲ್ಲಿ ನೀಡಲಾದ ಕೆಲವು ಚಟುವಟಿಕೆಗಳನ್ನು ಮಾಡಿಸಲು ತರಗತಿಯಲ್ಲಿ ಚಕ್‌ಮಕ್‌ಗಳನ್ನು ಬಳಸುತ್ತಿದ್ದರು. ಆದ್ದರಿಂದ, ಚಕ್‌ಮಕ್ ಶಿಕ್ಷಕರಿಂದ ನಿರಂತರ ಪ್ರತಿಕ್ರಿಯೆಯನ್ನು ಪಡೆಯಿತು ಮತ್ತು ಅದು ಉದ್ದೇಶಿಸಿದ್ದ ಪೂರಕ ಓದು-ಕಲಿಕೆಯ ಸಾಮಗ್ರಿಯಾಗಿ ತನ್ನ ಉದ್ದೇಶವನ್ನು ಪೂರೈಸಿತು.

ಕೆಲವು ವರ್ಷಗಳ ನಂತರ ಚಕ್‌ಮಕ್ ಕ್ಲಬ್‌ಗಳು ಸ್ಥಾಪನೆಯಾದವು. ಚಕ್‌ಮಕ್ ಕ್ಲಬ್‌ಗಳು ಮಕ್ಕಳ ಕ್ಲಬ್‌ಗಳಾಗಿದ್ದು, ಅವು ಮಕ್ಕಳು ಪರಸ್ಪರರನ್ನು ಭೇಟಿ ಮಾಡುವ, ಸಭೆ ಸೇರುವ ಸ್ಥಳಗಳಾಗಿದ್ದವು. ಪತ್ರಿಕೆಯ ಹೆಸರು ತೆಗೆದುಕೊಂಡು ಕ್ಲಬ್‌ನ್ನು ಸ್ಥಾಪಿಸಲಾಯಿತೇ ಹೊರತು ಪತ್ರಿಕೆಯು ಈ ಕ್ಲಬ್‌ಗಳನ್ನು ನಡೆಸಲಿಲ್ಲ. ಪತ್ರಿಕೆಯನ್ನು ಅಲ್ಲಿ ಓದಿ ಚರ್ಚಿಸಲಾಗುತ್ತಿತ್ತು. ಕ್ಲಬ್‌ಗಳು ನೂರಕ್ಕೂ ಹೆಚ್ಚು ಸಂಖ್ಯೆಯಲ್ಲಿದ್ದವು. ಮಕ್ಕಳು ಮತ್ತು ಯುವಕರು ಅದನ್ನು ಒಂದು ನಿಗದಿಪಡಿಸಿದ ಸ್ಥಳದಲ್ಲಿ ನಡೆಸುತ್ತಿದ್ದರು. ವಾಚನಗೋಷ್ಠಿಗಳು, ನಿರೂಪಣೆಗಳು, ಚರ್ಚೆಗಳು, ಸಂಗೀತ ಮತ್ತು ವಿನೋದವು ಈ ಕ್ಲಬ್‌ಗಳ ಭಾಗವಾಗಿತ್ತು. ಇಲ್ಲಿಯೂ, ಚಕ್‌ಮಕ್ ಮಕ್ಕಳಿಗೆ ಓದಲು ದೊರಕಿತು, ಅವರ ಓದು ವಿಸ್ತಾರವಾಯಿತು. ಈ ಪ್ರಕ್ರಿಯೆಯಿಂದ, ಮಕ್ಕಳು

ನಿಯತಕಾಲಿಕದಿಂದ ಮತ್ತು ಮುಖ್ಯವಾಗಿ ಪರಸ್ಪರರ ಒಡನಾಟದಿಂದ ಸಾಕಷ್ಟು ಕಲಿತರು. ಚಕ್‌ಮಕ್ ಹಲವು ಬಿಸಿ ಬಿಸಿ ಚರ್ಚೆಗಳಿಗೂ ಕಿಡಿಯನ್ನೂ ಹೊತ್ತಿಸಿತ್ತು.

ಚಕ್‌ಮಕ್ ನಿಯತಕಾಲಿಕಗಳ ಮೊದಲ ದಶಕದ ಪ್ರತಿಗಳು ಅಥವಾ ಅದಕ್ಕಿಂತ ನಂತರದ್ದನ್ನು ನೋಡಿದರೆ, ಅದು ಮುಖ್ಯವಾಗಿ 'ಹೇಗೆ ಮತ್ತು ಏಕೆ' ಪ್ರಶ್ನೆಗಳ ನಿಯತಕಾಲಿಕವಾಗಿತ್ತು ಎಂಬುದು ಗೊತ್ತಾಗುತ್ತದೆ. ಇದೊಂದು, ದೃಢೀಕರಿಸಲ್ಪಟ್ಟ ಸೂಕ್ತ ವಿವರಣೆಗಳೊಂದಿಗೆ, ವಿನೋದವನ್ನೂ ಒಳಗೊಂಡ, ಇಲ್ಲಿನ ಬಹುಮುಖ್ಯವಾದ ಶೈಲಿಯ ಏಕಲವ್ಯ ಮಾದರಿಯ ಶಿಕ್ಷಣದ ವಿಧಾನವನ್ನು ಪ್ರತಿಬಿಂಬಿಸುತ್ತಿತ್ತು. ಈ ಸಮಯದಲ್ಲಿ, ಚಕ್‌ಮಕ್ ಗಮನಿಸುತ್ತಿದ್ದ ಸಮಸ್ಯೆಗಳು ಮತ್ತು ವಿಷಯಗಳು ನಗರ ಮತ್ತು ಅರೆ-ಗ್ರಾಮೀಣ ಮಧ್ಯಮ ವರ್ಗದವರಿಗೆ ಸಂಬಂಧಿಸಿದವುಗಳಾಗಿದ್ದವು. ಓದುಗರು ಹೆಚ್ಚಾಗಿ, ಅರೆ-ಗ್ರಾಮೀಣ ಪ್ರದೇಶದ ಹಿಂದಿ ಮಾತನಾಡುವ ಪ್ರದೇಶದ ಮಕ್ಕಳಾಗಿದ್ದರು.

90 ರ ದಶಕದ ಕೊನೆಯಲ್ಲಿ, ಶಾಲೆಗಳಲ್ಲಿನ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮಗಳು ಜನರ ಗಮನವನ್ನು ಹೆಚ್ಚಾಗಿ ಸೆಳೆಯಲಾರಂಭಿಸಿದಾಗ, ಚಕ್‌ಮಕ್ ಆರಂಭಿಕ ಓದುಗರಿಗೆ ಕಿರು ಗದ್ಯ ಮತ್ತು ಕವಿತೆಗಳನ್ನು ಸೇರಿಸುವುದರತ್ತ ಗಮನ ನೀಡಿ ಈ ಬದಲಾವಣೆಗೆ ಸಹಕರಿಸಿತು. ಈ ಮೊದಲ ಹತ್ತರಿಂದ ಹದಿನೈದು ವರ್ಷಗಳಲ್ಲಿ, ಚಕ್‌ಮಕ್‌ನ ಗಮನವು ವಿಜ್ಞಾನದ ಮೇಲೆಯೇ ಕೇಂದ್ರೀಕೃತವಾಗಿದ್ದರೂ, ಅದರ ವ್ಯಾಪ್ತಿಯು ಹೆಚ್ಚಾಗಿ ಸರ್ಕಾರಿ ಶಾಲೆಗಳು ಮತ್ತು ನಗರೇತರ ಪ್ರದೇಶಗಳಲ್ಲಿನ ಮಕ್ಕಳನ್ನು ಒಳಗೊಂಡಿತ್ತು.

ಸುಮಾರು ಎರಡು ದಶಕಗಳ ನಂತರ ಇದು ಬದಲಾಯಿತು. ಚಕ್‌ಮಕ್ ವಿಜ್ಞಾನ ವಿಷಯಗಳತ್ತ ತನ್ನ ಗಮನವನ್ನು ಕಡಿಮೆ ಮಾಡಲಾರಂಭಿಸಿತು. ಈ ಬದಲಾವಣೆಯು ಹಲವಾರು ಕಾರಣಗಳಿಂದಾಗಿ ಉಂಟಾಯಿತು. ಒಂದು, ಈ ಹೊತ್ತಿಗೆ ಎಚ್‌ಎಸ್‌ಟಿಪಿ ಕೊನೆಗೊಂಡಿದ್ದು, ಮತ್ತೊಂದು ಸಂಪಾದಕೀಯ ತಂಡದಲ್ಲಿ ಬದಲಾವಣೆಯಾಗಿದ್ದು. ವಿಭಿನ್ನ ಪರಿಣತಿಯನ್ನು ಹೊಂದಿದ್ದ ಹೊಸ ತಂಡವು ವಿಭಿನ್ನ ರೀತಿಯಲ್ಲಿ ಚಕ್‌ಮಕ್‌ನ್ನು ಹೊರತರಲು ನಿಶ್ಚಯಿಸಿತು. ಇನ್ನೊಂದು ಕಾರಣವೆಂದರೆ, ಸಂಸ್ಥೆಯಾಗಿ ಏಕಲವ್ಯವು ವಿಜ್ಞಾನವನ್ನು (ಮತ್ತು ಇತರ ವಿಷಯಗಳು) ಮಕ್ಕಳಿಗೆ ಹೆಚ್ಚು ಸುಲಭವಾಗಿ ತಲುಪಿಸಲು ತಕ್ಕಮಟ್ಟಿಗೆ ಕೊಡುಗೆ ನೀಡಿದ್ದರೂ, ಈ ವಿಷಯಗಳನ್ನು ಜನಪ್ರಿಯಗೊಳಿಸುವಲ್ಲಿ ಸಾಕಷ್ಟು ವಸ್ತುಗಳನ್ನು ವಿಷಯವಸ್ತು(ಕಂಟೆಂಟ್)ಗಳನ್ನು (ಅದರ ನಿಯತಕಾಲಿಕೆಗಳನ್ನೂ ಒಳಗೊಂಡಂತೆ) ಅಭಿವೃದ್ಧಿಪಡಿಸಿತ್ತು. ಹಿಂದಿ ಭಾಷೆಗೆ ಸಂಬಂಧಿಸಿದಂತೆ ಮಕ್ಕಳ ಸಾಹಿತ್ಯ ಸಾಮಗ್ರಿಯ ಕೊರತೆ ಇತ್ತು. ವಾಸ್ತವವಾಗಿ, ಹಿಂದಿಯಲ್ಲಿ ಮಕ್ಕಳ ಸಾಹಿತ್ಯ ಕೃಷಿಯ ಪ್ರಮಾಣ ಬಹಳ ಕಡಿಮೆ ಮತ್ತು ಆ ಕೊರತೆ ಈಗಲೂ ಇದೆ. ಸ್ವಲ್ಪ ಮಟ್ಟಿಗೆ, ನಾವು ಮಕ್ಕಳ ಸಾಹಿತ್ಯವನ್ನು ಮಕ್ಕಳಿಗಾಗಿ ಬರೆದದ್ದು ಎಂದು ಭಾವಿಸುತ್ತೇವೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು, ಚಕ್‌ಮಕ್ ಮಕ್ಕಳಿಗಾಗಿ ಕಥೆಗಳು ಮತ್ತು ಕವಿತೆಗಳನ್ನು ಒಳಗೊಂಡಂತೆ ಸಾಹಿತ್ಯವನ್ನು ಅಭಿವೃದ್ಧಿಪಡಿಸಲು ಪ್ರಸಿದ್ಧ (ಮತ್ತು ಅಷ್ಟು ಪ್ರಸಿದ್ಧರಲ್ಲದ) ಲೇಖಕರೊಂದಿಗೆ ಕೆಲಸ ಮಾಡಲು ಪ್ರಾರಂಭಿಸಿತು. ಮಕ್ಕಳಿಗಾಗಿ ಬರೆಯುವ ಆಸಕ್ತಿಯಿದ್ದ ಎಲ್ಲರಿಗೂ ಚಕ್‌ಮಕ್ ವೇದಿಕೆಯಾಯಿತು. ಈ ಸಮಯದಲ್ಲಿ ಇದು ಮೊದಲಿನ ಕಪ್ಪು ಮತ್ತು ಬಿಳಿ ಬಣ್ಣದಿಂದ ನಾಲ್ಕು-ಬಣ್ಣದ ಮುದ್ರಣಕ್ಕೆ ಬದಲಾಯಿತು ಮತ್ತು ಇದನ್ನು ವೃತ್ತಿಪರವಾಗಿ ವಿನ್ಯಾಸಗೊಳಿಸಲಾಗಿತ್ತು.

ಚಕ್‌ಮಕ್ ಯಾವಾಗಲೂ *ಏಕಲವ್ಯ*ದ ಇತರ ಪ್ರಕಟಣೆಗಳಿಗೂ ಸಾಕಷ್ಟು ಸಂಪನ್ಮೂಲವನ್ನು ಒದಗಿಸಿದೆ. ಕವನ ಸಂಕಲನಗಳು, ಕವಿತೆಗಳ ಪೋಸ್ಟರ್‌ಗಳು, ಕವಿತೆಗಳ ಕಾರ್ಡ್‌ಗಳು, ಕಥಾ ಸಂಗ್ರಹಗಳು ಎಲ್ಲವೂ ಚಕ್‌ಮಕ್‌ನಲ್ಲಿ ಮೊದಲು ಪ್ರಕಟವಾದ ನಂತರ ಅವುಗಳನ್ನು ವಿವಿಧ ರೂಪದಲ್ಲಿ ಅಭಿವೃದ್ಧಿಪಡಿಸಲಾಗಿದೆ. ಉದಾಹರಣೆಗೆ,*ಆಜಾದಿ ಕಿ ಮುಕ್ತಿ* ಮತ್ತು *ಲೋಮ್ಡಿ ಔರ್ ಜಮೀನ್* ನಂತಹ ಪುಸ್ತಕಗಳು ಮೇರಾ ಪನ್ನಾಗೆ ಸಲ್ಲಿಸಲಾದ ಕಥೆಗಳ ಸಂಗ್ರಹವನ್ನು ಒಳಗೊಂಡಿವೆ. ತೀರಾ ಇತ್ತೀಚೆಗೆ, ಚಕ್‌ಮಕ್‌ನ ಕೆಲವು ಕಥೆಗಳನ್ನು ಚಿತ್ರ ಕಥೆಗಳ ಪುಸ್ತಕಗಳಾಗಿ ಪ್ರಕಟಿಸಲಾಗಿದೆ. ಉದಾಹರಣೆಗೆ *ಪತಂಗ್ ಕಿ ಕರಾಮತ್, ಸಾಂಪ್ ನೆ ಸೋಚಾ, ಹಮಾರಿ ಗಾಯ್ ಜಾನಿ, ಮುಜೆ ಕೋಯಿ ನಹಿ ಖಿಲಾಯಾ, ಬೈತಾ ಆಸ್ ಲಗಾಯೆ*. ಪ್ರಸ್ತುತ, *ಏಕಲವ್ಯ* ಪ್ರಕಾಶನದವರು ಚಕ್‌ಮಕ್‌ನಲ್ಲಿ ಎಳೆಯ ಯುವಕರು ಪ್ರಕಟಿಸಿದ ಕಥೆಗಳ ಸಂಗ್ರಹವನ್ನು ಅಭಿವೃದ್ಧಿಪಡಿಸುತ್ತಿದ್ದಾರೆ. ಮಕ್ಕಳು ಮತ್ತು ಚಕ್‌ಮಕ್‌ನೊಂದಿಗೆ ಸಾಹಿತ್ಯವೂ ಬೆಳೆಯುತ್ತಾ ಬಂದಿದೆ.

2000ದ ಅಂತ್ಯದಿಂದೀಚೆಗೆ ಚಕ್‌ಮಕ್‌ನ್ನು ಹೊಸ ಅವತಾರದೊಂದಿಗೆ ಪ್ರಕಟಿಸಲಾಯಿತು. ಹೆಚ್ಚು ಕಾಲ್ಪನಿಕ, *ಮೇರಾ ಪನ್ನಾ* ಗೆ ಹೆಚ್ಚಿನ ಒತ್ತು ಮತ್ತು ಗಣಿತ, ವಿಜ್ಞಾನಕ್ಕೆ ಸ್ವಲ್ಪ ಕಡಿಮೆ ಆದ್ಯತೆ. ಈ ಹೊತ್ತಿಗೆ ಮತ್ತೊಂದು ಬದಲಾವಣೆಯಾಗಿತ್ತು - ಇದು ಚಕ್‌ಮಕ್‌ನ ವ್ಯಾಪ್ತಿ. ಚಕ್‌ಮಕ್ ಸರ್ಕಾರಿ ಶಾಲೆಗಳು, ಅರೆ ಗ್ರಾಮೀಣ ಮತ್ತು ನಗರೇತರ ಪ್ರದೇಶಗಳಿಂದ ಖಾಸಗಿ ಶಾಲೆಗಳು ಹಾಗೂ ನಗರ ಪ್ರದೇಶಗಳಿಗೆ ಸ್ಥಳಾಂತರಗೊಂಡಿತು. ಈ ಹಂತದಲ್ಲಿ ಉದ್ದೇಶಿತ ಒದುಗರ ವಯಸ್ಸು ಈ ಮೊದಲು ನಿಗದಿ ಪಡಿಸಿದ್ದಕ್ಕಿಂತ ಸ್ವಲ್ಪ ಹೆಚ್ಚಿನ ವಯಸ್ಸಿಗೆ ಏರಿತು. ಪ್ರಸ್ತುತ ಈ ಚಕ್‌ಮಕ್ ಮಾಧ್ಯಮಿಕ ಶಾಲಾ ಮಕ್ಕಳ ಜೊತೆಗೆ ಪ್ರೌಢಶಾಲೆಯ ಮಕ್ಕಳ ಅಗತ್ಯಗಳನ್ನೂ ಪೂರೈಸುತ್ತಿದೆ. ಚಕ್‌ಮಕ್ ಒಳಗೊಳ್ಳುವ ವಿಷಯಗಳನ್ನು ಈ ಮಕ್ಕಳನ್ನು ಮನಸ್ಸಿನಲ್ಲಿಟ್ಟುಕೊಂಡು ಅಭಿವೃದ್ಧಿಪಡಿಸಲಾಗುತ್ತಿದೆ – ವಿಷಯಗಳ ಆಯ್ಕೆಯಲ್ಲಿ ಅವರ ಸಾಕ್ಷರತೆಯ ಮಟ್ಟಗಳು, ಅವರಿಗೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಜೊತೆಗೆ ಅವರ ಆರ್ಥಿಕ ಪರಿಸ್ಥಿತಿಯನ್ನು ಗಣನೆಗೆ ತೆಗೆದುಕೊಳ್ಳಲಾಗುತ್ತಿದೆ. ಚಕ್‌ಮಕ್‌ನ್ನು ಖಾಸಗಿ ಶಾಲೆಗಳು ತಮ್ಮ ತರಗತಿಗಳಲ್ಲಿ ಬಳಸಿಕೊಂಡವು. ಕವಿ ಗುಲ್ಜಾರ್ ಅವರು ಒಂದು ಸಂಚಿಕೆಯಲ್ಲಿ ದ್ವಿಪದಿಯನ್ನು ನೀಡುತ್ತಿದ್ದರು ಮತ್ತು ಮಕ್ಕಳು ಮುಂದಿನ ಸಂಚಿಕೆಗೆ ಅದಕ್ಕೆ ಸರಿಹೊಂದುವ ಚಿತ್ರಗಳನ್ನು ಕಳುಹಿಸುವ ಮೂಲಕ, ಅಂಕಣ *ಬೋಲಿ ರಂಗೋಲಿ* ಗಳ ಮೂಲಕ ಹಾಗೂ ವಿವಿಧ ಚಟುವಟಿಕೆಗಳಿಗಾಗಿ ಮೀಸಲಿರುವ ಅಂಕಣಗಳ ಮೂಲಕ, ಮಕ್ಕಳನ್ನು ಹಲವಾರು ರೀತಿಯಲ್ಲಿ ಕಲಿಕೆಯಲ್ಲಿ ತೊಡಗಿಸಲಾಯಿತು. ಮತ್ತೊಂದು ಅಂಕಣ *ಅಗರ್-ಮಗರ್* , ಇದರಲ್ಲಿ ಮಕ್ಕಳು ಗುಲ್ಜಾರ್‌ಗೆ ಪ್ರಶ್ನೆಗಳನ್ನು ಕೇಳುತ್ತಿದ್ದರು ಮತ್ತು ಅವರು ಆಗಾಗ್ಗೆ ಪ್ರಾಸದಲ್ಲಿ, ಆಗಾಗ್ಗೆ ವಿಚಿತ್ರ ಶೈಲಿಯಲ್ಲಿ ಉತ್ತರಿಸುತ್ತಿದ್ದರು. ಎಳೆಯ ಯುವಕರಿಗೆ ಬರೆಯಲು ಉತ್ತೇಜನ ನೀಡಲಾಯಿತು, ಈ ವಯೋಮಾನದವರಿಗೆ ಸಾಹಿತ್ಯವನ್ನು ರಚಿಸಲು ಅವಕಾಶ ನೀಡಲು ನವ ದೆಹಲಿಯ *ಅಂಕುರ್* ಎಂಬ ಸಂಸ್ಥೆಯ ಸಹಯೋಗದೊಂದಿಗೆ *ಚಶ್ಮಾ ನಯಾ ಹೈ* ಎಂಬ ಅಂಕಣವನ್ನು ಪರಿಚಯಿಸಲಾಯಿತು. ಪ್ರಕೃತಿ ಸಂರಕ್ಷಣೆಯಲ್ಲಿ ತೊಡಗಿರುವ ಸಂಸ್ಥೆ ನೇಚರ್ ಕನ್ಸರ್ವೇಶನ್ ಫೌಂಡೇಶನ್‌ನ ಸಹಯೋಗದೊಂದಿಗೆ, ಲೇಖನಗಳ ಸರಣಿ ಮತ್ತು ಪ್ರಕೃತಿಗೆ ಸಂಬಂಧಿಸಿದ ಚಟುವಟಿಕೆಗಳ ಕುರಿತು ಲೇಖನಗಳನ್ನು ಅನುವಾದಿಸಿ ಪ್ರಕಟಿಸಲಾಗಿದೆ. ಇತರೆ ಹಲವು ಪ್ರಯೋಗಗಳನ್ನು ಕೂಡ ಅದರಲ್ಲಿ ಮಾಡಲಾಯಿತು. ಅವು –ಧಾರಾವಾಹಿ ರೂಪದಲ್ಲಿ *ಬಿಕ್ಕುವಿನ* ಚಿತ್ರ ಕಥೆಯ ಪ್ರಕಟಣೆ, ಕಥಾ ಸರಣಿ ರೂಪದಲ್ಲಿ

ಧಾರಾವಾಹಿಯ ಪ್ರಕಟಣೆ, ಹಲವು ಸಂಚಿಕೆಗಳಲ್ಲಿ ಕಂಡುಬಂದ ರಾಮ್‌ಸಹಾಯ್ ನಂತಹ ಹಲವು ಪಾತ್ರಗಳ ಪರಿಚಯ ಇತ್ಯಾದಿ.

ಈ ಎಲ್ಲವುಗಳ ಮೂಲಕ, ಚಕ್‌ಮಕ್ ಶಾಲಾ ಮಕ್ಕಳಿಗೆ ತರಗತಿಯಲ್ಲಿ ಬಳಸಬಹುದಾದ ಸಾಮರ್ಥ್ಯವನ್ನು ಹೊಂದಿರುವ ವೈನೋದದಿಂದ ಕೂಡಿದ ಪೂರಕ ಓದುವ ಸಾಮಗ್ರಿಯಾಗಿ ಮುಂದುವರೆಯಿತು.

ಹಾಗಾಗಿ, ಹಲವು ವರ್ಷಗಳಿಂದ, ಚಕ್‌ಮಕ್‌ನ್ನು ಮೂರೂ ಗುಂಪಿನ ಜನರು ಬಳಸಿದ್ದಾರೆ. ಮೊದಲನೆಯದು ನಾವು ಚಕ್‌ಮಕ್ ಯಾರಿಗಾಗಿ ತಯಾರಿಸುತ್ತೇವೋ ಆ ನಿರ್ದಿಷ್ಟ ಗುಂಪಿನ ಮಕ್ಕಳು. ಅವರು ಅದನ್ನು ಓದಲು ಖುಷಿಪಡುತ್ತಾರೆ ಮತ್ತು ಅದರಿಂದ ಕಲಿಯುತ್ತಾರೆ. ಐತಿಹಾಸಿಕವಾಗಿ ನೋಡುವಾಗ, ನಾವು ಪತ್ರಿಕೆಯನ್ನು ರೂಪಿಸುವಾಗ ಅವರನ್ನು ಮನಸ್ಸಿನಲ್ಲಿ ಇಟ್ಟುಕೊಂಡಿಲ್ಲದಿದ್ದರೂ, ಚಕ್‌ಮಕ್‌ನಿಂದ ಇತರ ಎರಡು ಗುಂಪುಗಳೂ ಸಹ ಪ್ರಯೋಜನ ಪಡೆದಿವೆ, ಒಬ್ಬರು ವಿವಿಧ ಸಂಸ್ಥೆಗಳಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಮಕ್ಕಳೊಂದಿಗೆ ಕೆಲಸ ಮಾಡುವವರು, ವಿವಿಧ ರೀತಿಯಲ್ಲಿ ಮಕ್ಕಳನ್ನು ತೊಡಗಿಸಲು ಪತ್ರಿಕೆಯಲ್ಲಿ ನಿರೂಪಿಸಲಾದ ವಿಷಯಗಳನ್ನು ಬಳಸಿಕೊಂಡಿದ್ದಾರೆ. ಇನ್ನೊಬ್ಬರು ಶಿಕ್ಷಕರು, ಚಕ್‌ಮಕ್‌ನ್ನು ತರಗತಿಗಳಲ್ಲಿ ಓದಿ, ಪತ್ರಿಕೆಯಲ್ಲಿ ಕೇಳಿದ ಪ್ರಶ್ನೆಗಳನ್ನು ಚರ್ಚಿಸಿ ಉತ್ತರಿಸಲು ಬಳಸಿದ್ದಾರೆ. ಈ ರೀತಿಯಲ್ಲಿ, ಚಕ್‌ಮಕ್ ಯಾವಾಗಲೂ ಮಕ್ಕಳಿಗೆ ಮೋಜಿನ ಪತ್ರಿಕೆಯಾಗಿ, ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರದಲ್ಲಿ ಮಕ್ಕಳಿಗೆ, ಶಿಕ್ಷಕರಿಗೆ ಮತ್ತು ಇತರರಿಗೆ ಸಂಪನ್ಮೂಲವಾಗಿದೆ.

ಸುಶೀಲ್ ಜೋಶಿ, ಟುಲ್ ಟುಲ್ ಬಿಸ್ವಾಸ್ ಮತ್ತು ಸಿ.ಎನ್ ಸುಬ್ರಮಣ್ಯಂ ಅವರೊಂದಿಗಿನ ಸಂಭಾಷಣೆಗಳು ಮತ್ತು ಮಾಹಿತಿಯ ಆಧಾರದ ಮೇಲೆ.

***

**ವಿನತಾ ವಿಶ್ವನಾಥನ್:** ಇವರು ಚಕ್‌ಮಕ್ ಪತ್ರಿಕೆಯ ಸಂಪಾದಕರು. ಅವರು ಪರಿಸರ ಶಾಸ್ತ್ರಜ್ಞರಾಗಿ ತರಬೇತಿ ಪಡೆದಿದ್ದಾರೆ ಮತ್ತು ಸಂಶೋಧಕರು, ಶಿಕ್ಷಕಿ ಮತ್ತು ವಿಜ್ಞಾನ ಬರಹಗಾರರಾಗಿ ಕೆಲಸ ಮಾಡಿದ್ದಾರೆ. ಅವರನ್ನು vvinatha@gmail.com ನಲ್ಲಿ ಸಂಪರ್ಕಿಸಬಹುದು.